CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಏಪ್ರಿಲ್ ೨೯, ೨೦೦೪ (ವೈಶಾಖ ೯, ಶಕ ವರ್ಷ ೧೯೨೬) | ಸಂಚಿಕೆ ೧೮ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬೆಂಗಳೂರು ಮಹಾನಗರ ಪ್ರದೇಶಕ್ಕೆ ಸಂಚಿತ ಹಣಕಾಸಿನ ಚೌಕಟ್ಟಿನೊಂದಿಗಿನ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆ-ಫಲಾನುಭವಿ ಬಂಡವಾಳ ವಂತಿಕೆ-ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ನಅಇ 27 ಎಂಎನ್‌ಐ 2000, ದಿನಾಂಕ:26-12-03.
2. ಸರ್ಕಾರದ ಆದೇಶ ಸಂಖ್ಯೆ:ನಅಇ 36 ಎಂಎನ್‌ಐ 2004, ದಿನಾಂಕ:13-02-04.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಬರುವಂತಹ ಬೊಮ್ಮನಹಳ್ಳಿ ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರಂ, ಮಹಾದೇವಪುರಂ, ರಾಜಾರಾಜೇಶ್ವರಿನಗರ ಮತ್ತು ಯಲಹಂಕ ಈ 7 ನಗರಸಭೆಗಳು ಮತ್ತು ಕೆಂಗೇರಿ ಪಟ್ಟಣ ಪುರಸಭೆಗೆ ರೂ.658.65 ಕೋಟಿ ಅಂದಾಜು ವೆಚ್ಚದಲ್ಲಿ ನೀರು ಪೂರೈಕೆ ಹಾಗೂ ಒಳಚರಂಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಪ್ರಸ್ತುತ 7 ನಗರಸಭೆಗಳು ಹಾಗೂ 1 ಕೆಂಗೇರಿ ಪುರಸಭೆ ಪ್ರದೇಶಗಳಲ್ಲಿ ವಿವಿಧ ಮಾದರಿಯ ಆಸ್ತಿಗಳ ಕುರಿತು ರಸ್ತೆ ಅಗೆಯುವ ವೆಚ್ಚವು ಸೇರಿದಂತೆ ಫಲಾನುಭವಿ ಬಂಡವಾಳ ವಂತಿಗೆ ದರಗಳನ್ನು ನಿಗದಿಪಡಿಸಲಾಗಿದೆ. ಈ ದರದಲ್ಲಿ ಬೆಂಗಳೂರು ಜಲಮಂಡಳಿಯು ವಿಧಿಸುವ ಮಾರ್ಗ ಹಾಗೂ ಸಂಪರ್ಕ ವೆಚ್ಚಗಳನ್ನು ಹೊರತುಗೊಂಡಿದೆ. ಸ್ಥಳೀಯ ನಗರ ಸಂಸ್ಥೆಗಳು ಸಂಗ್ರಹಿಸಿದ ಫಲಾನುಭವಿ ಬಂಡವಾಳ ವಂತಿಗೆಯನ್ನು ಸಂಬಂಧಿಸಿದ ನಗರ ಸ್ಥಳೀಯ ಸಂಸ್ಥೆಗಳು ಹಾಗೂ ಕೆ.ಯು.ಐ.ಡಿ.ಎಫ್.ಸಿ.ಯ "GBWASP Beneficiary Capital Contribution Account" ಶೀರ್ಷಿಕೆಯ ಜಂಟಿ ಖಾತೆಯಲ್ಲಿ ಜಮಾ ಮಾಡತಕ್ಕದ್ದು ಮತ್ತು ಬೆಂಗಳೂರು ಜಲ ಮಂಡಳಿಯ ಬೇಡಿಕೆಗೆ ತಕ್ಕಂತೆ ಹಣ ವರ್ಗಾಯಿಸತಕ್ಕದೆಂದು ಆದೇಶಿಸಲಾಗಿದೆ. ಸುಲಭ ಸಂಗ್ರಹಣೆ ಕ್ರಮವಾಗಿ ಕಟ್ಟಡ ನಕ್ಷೆಗಳನ್ನು ಅನುಮೋದಿಸುವ ಸಂದರ್ಭದಲ್ಲಿ ಸ್ಥಳೀಯ ನಗರ ಸಂಸ್ಥೆಗಳು ಫಲಾನುಭವಿ ಬಂಡವಾಳ ವಂತಿಗೆಯನ್ನು ಸಂಗ್ರಹಿಸತಕ್ಕದೆಂದು ಸೂಚಿಸಲಾಗಿದೆ.

ಈ ಬಗ್ಗೆ ಯೋಜನೆಯ ಚಾಲನಾ ಸಮಿತಿಯು ದಿನಾಂಕ:16.03.2004ರಂದು ನಡೆಸಿದ ಸಭೆಯಲ್ಲಿ ಸ್ಥಳೀಯ ನಗರಸಭೆಗಳ ಸದಸ್ಯರು ಹಾಗೂ ಪ್ರತಿನಿಧಿಗಳು ನೀಡಿದ ಅಭಿಪ್ರಾಯ ಹಾಗೂ ಸಲಹೆಗಳನ್ನು ಪರಿಗಣಿಸಿ, ಸ್ಥಳೀಯ ನಗರಸಭೆಗಳು/ಟಿ.ಎಂ.ಸಿ. ಪ್ರದೇಶಗಳಲ್ಲಿ ಹಾಗೂ ಬೆಂಗಳೂರು ನಗರ ಪ್ರದೇಶದಲ್ಲಿ ಇರುವ ಸಿಂಡಿಕೇಟ್ ಬ್ಯಾಂಕಿನ designated ಶಾಖೆಗಳ ಮೂಲಕ ಬೆಂಗಳೂರು ಜಲ ಮಂಡಳಿಯು ಫಲಾನುಭವಿ ಬಂಡವಾಳ ವಂತಿಗೆಯನ್ನು ಸಂಗ್ರಹಿಸಬೇಕೆಂದು ತೀರ್ಮಾನಿಸಿದೆ. ಬಳಕೆದಾರರು ಸರ್ಕಾರದ ಆದೇಶ ದಿನಾಂಕ:13.02.2004ರಲ್ಲಿ ನಿಗದಿಪಡಿಸಲಾದ ದರದಂತೆ ತಾವು ಪಾವತಿಸಬೇಕಾದ ಒಂದು ಬಾರಿ ಬಂಡವಾಳ ವಂತಿಗೆಯನ್ನು ಮೇಲ್ಕಂಡ ಶೀರ್ಷಿಕೆಗೆ ನೇರವಾಗಿ ತಮ್ಮ ಇಷ್ಟದ ಸಿಂಡಿಕೇಟ್ ಬ್ಯಾಂಕಿನ ಯಾವುದೇ designated ಶಾಖೆಯಲ್ಲಿ ಪಾವತಿಸಬೇಕು. ಯೋಜನೆಯು ಪ್ರಾರಂಭವಾಗುವವರೆಗೆ ಈ ಹಣವು ಬೆಂಗಳೂರು ಜಲಮಂಡಳಿಯಿಂದ ಸಂಗ್ರಹಿಸಲ್ಪಡುವುದು. ತದನಂತರ, ಬೆಂಗಳೂರು ಮಹಾನಗರ ಪ್ರದೇಶದ ಸಂಬಂಧಪಟ್ಟ ನಗರಪುರಸಭೆ/ಪಟ್ಟಣಸಭೆಗಳು ಈ ಹಣವನ್ನು ಸಂಗ್ರಹಿಸುವವು. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಬಡಾವಣೆ ಅನುಮೋದನೆ/ ನಕ್ಷೆ ಅನುಮೋದನೆ/ ಪ್ರಾರಂಭಿಕ ಪ್ರಮಾಣಪತ್ರ ನೀಡಲು, ನಿರಾಕ್ಷೇಪಣಾ ಪ್ರಮಾಣಪತ್ರವನ್ನು ನೀಡುವ ಮತ್ತು

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ನೀಡುವ ಪೂರ್ವ ಮೇಲ್ಕಂಡ ಖಾತೆಗೆ ಫಲಾನುಭವಿ ವಂತಿಗೆಯು ಪಾವತಿಸಲ್ಪಟ್ಟಿದೆ ಎಂಬುದನ್ನು ಬೆಂಗಳೂರು ಜಲಮಂಡಳಿಯು ಖಚಿತಪಡಿಸಿಕೊಳ್ಳಬೇಕು. ಅಂತೆಯೇ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 36 ಎಂಎನ್‌ಐ 2004, ಬೆಂಗಳೂರು, ದಿನಾಂಕ:26ನೇ ಮಾರ್ಚ್, 2004**

ಸರ್ಕಾರವು ಮುಂದುವರೆದು ಈ ಕೆಳಕಂಡಂತೆ ಆದೇಶಿಸಿದೆ.

1) ಬೆಂಗಳೂರು ನಗರ ಪ್ರದೇಶ ಸೇರಿದಂತೆ ಪ್ರಸ್ತಾಪಿತ ಈ ನೀರು ಪೂರೈಕೆ ಮತ್ತು ಒಳಚರಂಡಿ ಯೋಜನೆಯು ಅನುಷ್ಠಾನಗೊಳಿಸಲ್ಪಡುವುದೊ, ಅಂತಹ ಸಂಬಂಧಪಟ್ಟ ನಗರ ಪುರಸಭೆಗಳು/ಪಟ್ಟಣ ಪುರಸಭೆ ಪ್ರದೇಶಗಳಲ್ಲಿನ ಸಿಂಡಿಕೇಟ್ ಬ್ಯಾಂಕಿನ designated ಶಾಖೆಗಳಲ್ಲಿ ಬೆಂಗಳೂರು ಜಲಮಂಡಳಿಯು "GBWASP Beneficiary Capital Contribution Account" ಖಾತೆ ತೆರೆಯತಕ್ಕದ್ದು.

2) ಸರ್ಕಾರದ ಆದೇಶ ದಿನಾಂಕ:13.02.2004ರಲ್ಲಿ ನಿಗದಿಪಡಿಸಿದ ದರದಂತೆ ಫಲಾನುಭವಿ ಬಳಕೆದಾರರು, ಫಲಾನುಭವಿ ಬಂಡವಾಳ ವಂತಿಗೆಯನ್ನು ನೇರವಾಗಿ ತಮಗೆ ಇಷ್ಟವಾದ ಸಿಂಡಿಕೇಟ್ ಬ್ಯಾಂಕಿನ ಯಾವುದೇ designated ಶಾಖೆಯಲ್ಲಿ, ಬೆಂಗಳೂರು ಜಲಮಂಡಳಿಯು ತೆರೆದಂತಹ "GBWASP Beneficiary Capital Contribution Account" ಗೆ ಪಾವತಿ ಮಾಡಬೇಕು. ಈ ಸಂಗ್ರಹಣೆ ಪದ್ಧತಿಯು ದಿನಾಂಕ:01.04.2004ರಿಂದ ಜಾರಿಗೆ ಬರಲಿದೆ. ಇದು ದಿನಾಂಕ:01.04.2004ರಿಂದ ಕಾರ್ಯಗತಗೊಳಿಸಲ್ಪಡುವಂತೆ ಎಲ್ಲಾ ಕ್ರಮಗಳನ್ನು ಬೆಂಗಳೂರು ಜಲ ಮಂಡಳಿಯು ತೆಗೆದುಕೊಳ್ಳಬೇಕು.

3) ಪ್ರತಿ 60 ದಿನಗಳ ಅಂತ್ಯಕ್ಕೆ ಬೆಂಗಳೂರು ಜಲಮಂಡಳಿಯು ತಾನು ಸ್ವೀಕರಿಸಿದ ಮೊತ್ತದ ಪೈಕಿ ರಸ್ತೆ ಅಗೆಯುವ (ರೋಡ್ ಕಟಿಂಗ್) ವೆಚ್ಚ ಬಾಬ್ತಿನ ಮೊತ್ತವನ್ನು ಸಂಬಂಧಿಸಿದ ನಗರಸಭೆ/ಪಟ್ಟಣ ಪುರಸಭೆಗಳಿಗೆ ವರ್ಗಾಯಿಸುವುದು. ದಿನಾಂಕ:31.03.2004 ರವರೆಗೆ ಸಂಗ್ರಹಿಸಲ್ಪಟ್ಟ ಹಣದ ಪೈಕಿ ಉಳಿಸಿಕೊಳ್ಳಲಾದ ರಸ್ತೆ ಅಗೆಯುವ (ರೋಡ್ ಕಟಿಂಗ್) ವೆಚ್ಚವು ಸೇರಿದಂತೆ ಜಲಮಂಡಳಿಯಿಂದ ವರ್ಗಾಯಿಸಲ್ಪಟ್ಟ ಈ ಹಣವನ್ನು ಸಿ.ಎಂ.ಸಿ/ಟಿ.ಎಂ.ಸಿ.ಗಳು ಪ್ರತ್ಯೇಕವಾದ ಖಾತೆಯಲ್ಲಿ ಇಟ್ಟುಕೊಂಡು, ನೀರು ಪೂರೈಕೆ ಯೋಜನೆಯು ಪೂರ್ತಿಗೊಂಡ ನಂತರ, ರಸ್ತೆ ರಿಪೇರಿ ಉದ್ದೇಶ ಹೊರತುಪಡಿಸಿ ಬೇರೆ ಯಾವ ಉದ್ದೇಶಕ್ಕೂ ಉಪಯೋಗಿಸಬಾರದು.

4) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಬಡಾವಣೆ ಅನುಮೋದನೆ/ಕಟ್ಟಡ ನಕ್ಷೆ ಅನುಮೋದನೆ, ಪ್ರಾರಂಭ (commencement) ಪ್ರಮಾಣ ಪತ್ರ, ಇತ್ಯಾದಿ ಕುರಿತಾದ ಅರ್ಜಿಗಳನ್ನು ನಿರಾಕ್ಷೇಪಣಾ ಪತ್ರಕ್ಕಾಗಿ ಕಳುಹಿಸಿದಲ್ಲಿ ಬೆಂಗಳೂರು ಜಲಮಂಡಳಿಯು ನಿರಾಕ್ಷೇಪಣಾ ಪ್ರಮಾಣ ಪತ್ರ ನೀಡುವ ಸಂದರ್ಭದಲ್ಲಿ, ಫಲಾನುಭವಿ ಬಂಡವಾಳ ವಂತಿಗೆಗಳನ್ನು ಈಗಾಗಲೇ ಪಾವತಿಸಿದಲ್ಲಿ, ಸ್ವೀಕರಿಸಿದ್ದಕ್ಕೆ ಪ್ರಮಾಣ ಪತ್ರವನ್ನು ನೀಡುವುದು. ಒಂದುವೇಳೆ, ಫಲಾನುಭವಿ ಬಂಡವಾಳ ವಂತಿಗೆಯನ್ನು ನೀಡದಿದ್ದಲ್ಲಿ ಬೆಂಗಳೂರು ಜಲಮಂಡಳಿಯು ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ನೀಡತಕ್ಕದ್ದಲ್ಲ.

5) ನಗರಸಭೆಗಳು/ಪಟ್ಟಣ ಪುರಸಭೆಗಳಿಂದ ಕಟ್ಟಡ ನಕ್ಷೆ ಅನುಮೋದನೆ ನೀಡತಕ್ಕಂತಹ ಪ್ರಕರಣಗಳಲ್ಲಿ ಅರ್ಜಿದಾರರು ತಮ್ಮ ಅರ್ಜಿಯೊಂದಿಗೆ ತಾವು ಈಗಾಗಲೇ ಬೆಂಗಳೂರು ಜಲಮಂಡಳಿಯ ಖಾತೆಗೆ ವಂತಿಗೆಯನ್ನು ಪಾವತಿಸಿರುವ ಕುರಿತಾದ ಚಲನ್‌ದ ಫೋಟೋ ಪ್ರತಿಯೊಂದನ್ನು ಲಗತ್ತಿಸತಕ್ಕದ್ದು.

6) ಎಲ್ಲಾ ನಗರ ಸಭೆಗಳು/ಪಟ್ಟಣ ಪುರಸಭೆಯಲ್ಲಿ ಈ ಯೋಜನೆಯು ಪ್ರಾರಂಭವಾಗುವವರೆಗೆ ಬೆಂಗಳೂರು ಜಲಮಂಡಳಿಯ ಬ್ಯಾಂಕ್ ಖಾತೆಯು ಚಾಲ್ತಿಯಲ್ಲಿರುವುದು. ಯೋಜನೆಯು ಪ್ರಾರಂಭವಾದ ನಂತರ ಈ ಹಣ ಸಂಗ್ರಹಣೆ ಕುರಿತು ಆದೇಶಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

7) ಪ್ರತಿ ಆಸ್ತಿಗಳ ಮೇಲೆ ಈಗಾಗಲೇ ದಿನಾಂಕ:31.03.2004ರವರೆಗೆ ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಗಳಿಂದ ಸಂಗ್ರಹಿಸಲ್ಪಟ್ಟ (ರೂ.1,500/ ವಸತಿ ಆಸ್ತಿ ಹಾಗೂ ರೂ.3,000/ ವಾಣಿಜ್ಯ ಆಸ್ತಿ) ಫಲಾನುಭವಿ ಬಂಡವಾಳ ವಂತಿಗೆಯ ಮೊತ್ತದಲ್ಲಿ ರಸ್ತೆ ಅಗೆಯುವ (ರೋಡ್ ಕಟಿಂಗ್) ರಸ್ತೆ ವೆಚ್ಚವನ್ನು ಉಳಿಸಿಕೊಂಡು ಉಳಿದ ಮೊತ್ತವನ್ನು ಬೆಂಗಳೂರು ಜಲಮಂಡಳಿಗೆ ದಿನಾಂಕ:01.04.2004ರಂದು ವರ್ಗಾಯಿಸತಕ್ಕದ್ದು.

8) ಫಲಾನುಭವಿ ಬಂಡವಾಳ ವಂತಿಗೆಯ ಈ ವ್ಯವಸ್ಥೆಯು, ನಾಗರೀಕರು ಫಲಾನುಭವಿ ಬಂಡವಾಳ ವಂತಿಗೆಯನ್ನು ಪಾವತಿ ಮಾಡುವಂತೆ ಪ್ರಚಾರ ಮಾಡುವ ಜವಾಬ್ದಾರಿಯಿಂದ ನಗರಸಭೆಗಳು/ಪಟ್ಟಣ ಪುರಸಭೆಗಳನ್ನು ಮುಕ್ತರನ್ನಾಗಿಸುವುದಿಲ್ಲ. ಎಲ್ಲಾ ನಗರಸಭೆಗಳು/ಪಟ್ಟಣ ಪುರಸಭೆಗಳು ಹಣ ಸಂಗ್ರಹಣೆ ಸ್ಥಿತಿ ಕುರಿತು ಪ್ರತಿವಾರ ಪುನರಾವಲೋಕನೆ ಕೈಗೊಳ್ಳುವವು. ಮತ್ತು ಯಾವ ಆಸ್ತಿಗಳು ವಂತಿಗೆಯನ್ನು ಪಾವತಿ ಮಾಡದೇ ಇರುವವರಿಂದ ಸಿಂಡಿಕೇಟ್ ಬ್ಯಾಂಕಿನ "GBWASP Beneficiary Capital Contribution Account" ಗೆ ಪಾವತಿ ಮಾಡುವಂತೆ ತೀವ್ರ ಪ್ರಚಾರ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವ್ಹಿ.ಆರ್. ಇಲಕಲ್**

ಪಿ.ಆರ್.420 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## LAW SECRETARIAT
## ADDENDUM
### No. LAW:4607:LCM:2003, Bangalore, Dated:17th November, 2003

After First Para of Notification of even number dated:23.10.2003, the following para shall be inserted "the Public Prosecutor of the Sessions Court of the IInd Fast Track Court, Bangalore and all Additional State Public Prosecutor's, and High Court Government Pleader attached to the office of the

Public Prosecutor to be the Advocates on record in the case arising out of Crl No.332/99 of Yeshwanthpur Police Station, Bangalore and S.C. No.457/02 on the file of the Fast Track Court-II in all the cases filed either by the Accused or to be filed on behalf of the State to assist Sri B.R. Nanjundaiah, Senior Advocate and Special Public Prosecutor, Bangalore to conduct the Prosecution in all the hierarchy of Court in the State arising out of Crime No.332/99 of Yeshwanthpur Police Station.

By Order and in the Name of the Governor of Karnataka,
**K.B. MATTUR**
I/C Assistant Solicitor & Ex. Officio,
Under Secretary to Government, Law Department (LIT.I).

PR-419

**ಕಾನೂನು ಸಚಿವಾಲಯ**

**ವಿಷಯ:** ಕೊಡಗು ಜಿಲ್ಲೆ ಸೋಮವಾರಪೇಟೆ ಕಂದಾಯ ತಾಲ್ಲೂಕು ಕ್ಷೇತ್ರಕ್ಕೆ ಒಂದು ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಸೃಜಿಸುವ ಬಗ್ಗೆ-ಆದೇಶ.

**ಓದಲಾಗಿದೆ:** 1. ಶಾಸಕರು, ಸೋಮವಾರಪೇಟೆ, ಕೊಡಗು ಜಿಲ್ಲೆ ಇವರ ಮನವಿ ದಿನಾಂಕ:11.06.2003.
2. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೊಡಗು ಇವರ ಪತ್ರ ದಿನಾಂಕ:02.12.2003.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾಗಿರುವ ದಿನಾಂಕ:11.06.03ರ ಪತ್ರದಲ್ಲಿ ಸೋಮವಾರಪೇಟೆ ಕ್ಷೇತ್ರದ ಮಾನ್ಯ ಶಾಸಕರು ಸೋಮವಾರಪೇಟೆ ತಾಲ್ಲೂಕು ಕೊಡಗು ಜಿಲ್ಲೆಯಲ್ಲಿ ಅತಿ ಹೆಚ್ಚು ಜನಸಂಖ್ಯೆ ಉಳ್ಳ ತಾಲ್ಲೊಕ್ಕಾಗಿದ್ದು ಭೌಗೋಳಿಕವಾಗಿಯೂ ವಿಸ್ತೀರ್ಣ ಹೊಂದಿದೆ. ಅನೇಕ ಶಿಕ್ಷಣ ಸಂಸ್ಥೆಗಳು, ರಾಷ್ಟ್ರೀಯ ಬ್ಯಾಂಕ್‌ಗಳು ಹೆಚ್ಚಾಗಿರುವುದರಿಂದ ಹೆಚ್ಚುವರಿಯಾಗಿ 3 ನೋಟರಿ ಹುದ್ದೆಗಳನ್ನು ಸೃಜಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾಗಿರುವ ದಿನಾಂಕ:02.12.2003ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೊಡಗು ಇವರು ಸೋಮವಾರ ಪೇಟೆ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವ ಅಗತ್ಯತೆ ಇರುವುದಾಗಿ ಅಭಿಪ್ರಾಯ ನೀಡಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 121 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ:6ನೇ ಫೆಬ್ರವರಿ, 2004**

ಸೋಮವಾರಪೇಟೆ ಕಂದಾಯ ತಾಲ್ಲೊಕಿಗೆ ಒಂದು ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಹೆಚ್. ನಾಗೇಂದ್ರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

ಪಿ.ಆರ್.421

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ವಿಷಯ:** ಶ್ರೀ ಆರ್. ಗೋಪಾಲ ಬಾಬು ನಿವೃತ್ತ ಜಂಟಿ ನಿರ್ದೇಶಕರು, ಅವರಿಗೆ ಪೂರ್ವಾನ್ವಯವಾಗಿ ಜಂಟಿ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡುವ ಬಗ್ಗೆ ಆದೇಶ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ:ಆನಾಸ 152 ಆಇಸೇ 2000, ದಿನಾಂಕ:03.12.2001.
2. ಆನಾಸ 132 ಆಇಸೇ 98, ದಿನಾಂಕ:18.06.2003.

**ಪ್ರಸ್ತಾವನೆ:**

ಶ್ರೀ ಆರ್. ಗೋಪಾಲ ಬಾಬು ನಿವೃತ್ತ ಜಂಟಿ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಅವರಿಗೆ, ಅವರ ವಿರುದ್ಧ ಶಿಸ್ತು ಪ್ರಕರಣ ಬಾಕಿಯಿದ್ದ ಕಾರಣ ಜಂಟಿ ನಿರ್ದೇಶಕರ ಹುದ್ದೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 32ರಡಿ ಸ್ವತಂತ್ರ ಪ್ರಭಾರದಲ್ಲಿರಿಸಿ, ದಿನಾಂಕ:03.12.2001ರಿಂದ ಜಾರಿಗೆ ಬರುವಂತೆ ಜಂಟಿ ನಿರ್ದೇಶಕರ ಹುದ್ದೆಗೆ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಮುಂಬಡ್ತಿ ನೀಡಲಾಗಿದೆ. ಅಧಿಕಾರಿಯು ವಯೋನಿವೃತ್ತಿ ಮೇರೆಗೆ ಅದೇ ತಿಂಗಳ ಅಂತ್ಯಕ್ಕೆ ಅಂದರೆ, ದಿನಾಂಕ:31.12.2001ರಂದು ಸೇವೆಯಿಂದ ನಿವೃತ್ತರಾಗಿದ್ದಾರೆ. ಸದರಿ ಅಧಿಕಾರಿಯ ವಿರುದ್ಧ ಬಾಕಿಯಿದ್ದ ಶಿಸ್ತು ಕ್ರಮವನ್ನು ಸರ್ಕಾರ ಕೈಬಿಡಲು ನಿರ್ಧರಿಸಿ, ದೋಷಾರೋಪಣೆಗಳಿಂದ ಅವರನ್ನು ವಿಮುಕ್ತಿಗೊಳಿಸಿ, ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಹೊರಡಿಸಿದೆ. ಆಪಾದಿತ ಅಧಿಕಾರಿಯ ವಿರುದ್ಧ ಶಿಸ್ತುಕ್ರಮ ಬಾಕಿಯಿದ್ದರೂ ಯಾವ ತತ್ವಗಳನ್ನಾಧರಿಸಿ, ಜಂಟಿ ನಿರ್ದೇಶಕರ ಹುದ್ದೆಗೆ ನಿಯಮ 32ರಡಿಯಲ್ಲಿ ಮುಂಬಡ್ತಿ ನೀಡಲಾಯಿತೊ, ಅದೇ ತತ್ವವನ್ನಾಧರಿಸಿ ದಿನಾಂಕ:03.12.2001ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಧಿಕಾರಿಗೆ ಸ್ಥಾನಪನ್ನಾ ಮುಂಬಡ್ತಿ ನೀಡಲು ಸರ್ಕಾರ ಪರಿಗಣಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆನಾಸ 211 ಆಇಸೇ 2003, ಬೆಂಗಳೂರು, ದಿನಾಂಕ:6ನೇ ಏಪ್ರಿಲ್, 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳ ಹಿನ್ನೆಲೆಯಿಂದಾಗಿ ಶ್ರೀ ಆರ್. ಗೋಪಾಲ ಬಾಬು, ನಿವೃತ್ತ ಜಂಟಿ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ (ಮುಂಬಡ್ತಿ, ವೇತನ ಮತ್ತು ಪಿಂಚಣಿಗಳ ಕ್ರಮ ಬದ್ಧತೆ ಅಧಿನಿಯಮ 1973ರಡಿ ರಚಿತಗೊಂಡಿರುವ ಕೆ.ಸಿ.ಎಸ್. (ಆರ್.ಪಿ.ಪಿ.) ನಿಯಮಗಳು 1978ರ ನಿಯಮ-2(3)ರಡಿ

ದಿನಾಂಕ:03.12.2001ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ರೂ.10,650/- 15,850/-ರ ವೇತನ ಶ್ರೇಣಿಯಲ್ಲಿ ಜಂಟಿ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನಾ ಮುಂಬಡ್ತಿ ನೀಡಿ ಸರ್ಕಾರ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ. ಶ್ರೀನಿವಾಸನ್**

ಪಿ.ಆರ್.422

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ನಗರ ಸ್ಥಳೀಯ ಸಂಸ್ಥೆಗಳಲ್ಲಿನ ನಿವೃತ್ತ ನೌಕರರಿಗೆ ಪಿಂಚಣಿ ಮತ್ತು ಪಿಂಚಣಿ ಸೌಲಭ್ಯ ಮಂಜೂರಾತಿ-31.03.2004ರ ನಂತರ ನಿವೃತ್ತರಾಗುವ ನೌಕರರಿಗೆ ಪಿಂಚಣಿ: ಪಿಂಚಣಿ ಸೌಲಭ್ಯದ ಬಗ್ಗೆ- ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ನಅಇ 10 ಇಎಂಸಿ 99 (ಭಾಗ) ದಿನಾಂಕ:03.02.2003.
2. ರಾಜ್ಯ ಲೆಕ್ಕಪತ್ರ ನಿಯಂತ್ರಕರು, ಬೆಂಗಳೂರು ರವರ ಪತ್ರ ಸಂಖ್ಯೆ: ರಾಲೆಪ 4 ಮುಪಿಂಪ್ರ 01-02 ದಿನಾಂಕ:23.12.03.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ರಾಜ್ಯದ ನಿವೃತ್ತ ಮುನ್ಸಿಪಲ್ ನೌಕರರಿಗೆ ಹಾಗೂ ಮರಣ ಹೊಂದಿರುವ ಸ್ಥಳೀಯ ಸಂಸ್ಥೆಗಳ ನೌಕರರುಗಳ ಕುಟುಂಬಗಳಿಗೆ ಕುಟುಂಬ ಪಿಂಚಣಿಯನ್ನು ದಿನಾಂಕ:31.04.2004ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು. ದಿನಾಂಕ:01.04.2004 ಮತ್ತು ನಂತರದಲ್ಲಿ ನಿವೃತ್ತಿಯಾಗುವ ನೌಕರರಿಗೆ ನಿವೃತ್ತಿ ವೇತನ: ನಿವೃತ್ತಿ ಸೌಲಭ್ಯದ ಬಗ್ಗೆ ಪರ್ಯಾಯ ವ್ಯವಸ್ಥೆ ಮಾಡುವ ಬಗ್ಗೆ ಪ್ರತ್ಯೇಕ ಕ್ರಮ ವಹಿಸುವುದಾಗಿ ತಿಳಿಸಲಾಗಿತ್ತು.

ಓದಲಾದ (2)ರ ಪತ್ರದಲ್ಲಿ ರಾಜ್ಯ ಲೆಕ್ಕಪತ್ರ ನಿಯಂತ್ರಕರು ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳ ನಿವೃತ್ತ ನೌಕರರುಗಳಿಗೆ ಹಾಗೂ ಕುಟುಂಬ ನಿವೃತ್ತಿ ವೇತನದಾರರುಗಳಿಗೆ, ಹಾಲಿ ದಿನಾಂಕ:01.04.2004ರವರೆಗೆ ಮಾತ್ರ ಪಿಂಚಣಿ ಪ್ರಾಧಿಕರಿಸಲು ಅವಕಾಶ ಕಲ್ಪಿಸಲಾಗಿರುವುದರಿಂದ ದಿನಾಂಕ: 01.04.2004 ಮತ್ತು ನಂತರ ನಿವೃತ್ತರಾಗುವ: ನಿಧನರಾಗುವವರ ಪಿಂಚಣಿ ಪ್ರಕರಣಗಳನ್ನು ಇತ್ಯರ್ಥಪಡಿಸುವ ಬಗ್ಗೆ ಆದೇಶವನ್ನು ಕೋರಿದ್ದರು.

ರಾಜ್ಯ ಲೆಕ್ಕಪತ್ರ ನಿಯಂತ್ರಕರು, ಬೆಂಗಳೂರು ಇವರ ಪತ್ರದ ಹಿನ್ನೆಲೆಯಲ್ಲಿ ನಗರ ಸ್ಥಳೀಯ ಸಂಸ್ಥೆಗಳ ನೌಕರರ ನಿವೃತ್ತಿ ಸೌಲಭ್ಯದ ಬಗ್ಗೆ ಸರ್ಕಾರದಲ್ಲಿ ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 10 ಇಎಂಸಿ 99 (ಭಾಗ), ಬೆಂಗಳೂರು, ದಿನಾಂಕ:2ನೇ ಏಪ್ರಿಲ್, 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರಿ ಆದೇಶ ಸಂಖ್ಯೆ: ನಅಇ 10 ಇಎಂಸಿ 99 (ಭಾಗ) ದಿನಾಂಕ:03.02.2004ರಲ್ಲಿ ನೀಡಲಾದ ಆದೇಶವನ್ನು ಭಾಗಶಃ ಮಾರ್ಪಡಿಸಿ, 01.04.2004 ರಿಂದ 30.09.2004ರ ಅವಧಿಯಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಸೇವೆಯಿಂದ ನಿವೃತ್ತರಾಗುವ: ನಿಧನರಾಗುವವರ ಪಿಂಚಣಿ ಪ್ರಕರಣಗಳಿಗೆ ಸಂಬಂಧಿಸಿದಂತೆ ದಿನಾಂಕ:01.04.2002ರ ಪೂರ್ವದಲ್ಲಿ ಚಾಲ್ತಿಯಲ್ಲಿದ್ದ ಪದ್ಧತಿಯನ್ನು ಮುಂದುವರಿಸಿ ಆದೇಶಿಸಲಾಗಿದೆ.

ದಿನಾಂಕ:01.10.2004 ಹಾಗೂ ನಂತರ ನಿವೃತ್ತರಾಗುವ ಪೌರಸೇವಾ ನೌಕರರ ಪಿಂಚಣಿ ಮತ್ತು ಪಿಂಚಣಿ ಸೌಲಭ್ಯಗಳ ಬಗ್ಗೆ ಪ್ರತ್ಯೇಕವಾಗಿ ಪರಿಶೀಲಿಸಲಾಗುವುದು.

ಉಳಿದಂತೆ ದಿನಾಂಕ:03.02.2003ರ ಸಂಖ್ಯೆ:ನಅಇ 10 ಇಎಂಸಿ 99 (ಭಾಗ)ದ ಸರ್ಕಾರಿ ಆದೇಶದಲ್ಲಿನ ಸೂಚನೆಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 148 ಇಎಕ್ಸ್‌ಪಿ 9:2004 ದಿನಾಂಕ:24.03.2004ರಲ್ಲಿ ಮಾಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಗದೀಶ್ ಜೋಯಿಸ್**

ಪಿ.ಆರ್.423

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2003-2004ನೇ ಸಾಲಿನ ಸೆಮಿಸ್ಟರ್ ಡಿಪ್ಲೋಮಾ ಅಭ್ಯರ್ಥಿಗಳಿಗೆ ಸೆಮಿಸ್ಟರ್ ಪರೀಕ್ಷಾ ಶುಲ್ಕ ನಿಗದಿಪಡಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಇಡಿ 245 ಟಿಪಿಇ 98 ದಿನಾಂಕ:11.08.2002.
2. ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ:ಡಿಟಿಇ 6:110:ಇಎಪಿ 2003 ದಿನಾಂಕ:15.07.2003 ಮತ್ತು ದಿನಾಂಕ:06.01.2004ರಂದು ಕೊನೆಗೊಂಡ ಪತ್ರ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿನ ಸರ್ಕಾರಿ, ಅನುದಾನಿತ ಮತ್ತು ಅನುದಾನರಹಿತ ಪಾಲಿಟೆಕ್ನಿಕ್‌ಗಳಲ್ಲಿನ ಪರೀಕ್ಷಾ ಶುಲ್ಕ ಹಾಗೂ ಇನ್ನಿತರೆ ಶುಲ್ಕಗಳನ್ನು ಆ ಆದೇಶಕ್ಕೆ ಲಗತ್ತಿಸಿರುವ ಅನುಬಂಧದ ಕಾಲಂ 4ರಲ್ಲಿ ನಮೂದಿಸಿರುವಂತೆ ಪರಿಷ್ಕರಿಸಿ ಆದೇಶ ಹೊರಡಿಸಿದೆ.

2. ಮೇಲೆ (2)ರಲ್ಲಿ ಓದಲಾದ ದಿನಾಂಕ:15.07.2003 ಮತ್ತು 06.09.2003ರ ಪತ್ರಗಳಲ್ಲಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರು 2003-04ನೇ ಸಾಲಿನಿಂದ ರಾಜ್ಯದಲ್ಲಿನ ಸರ್ಕಾರಿ, ಅನುದಾನಿತ ಹಾಗೂ ಅನುದಾನರಹಿತ ಖಾಸಗಿ ಪಾಲಿಟೆಕ್ನಿಕ್‌ಗಳಲ್ಲಿ ಸೆಮಿಸ್ಟರ್ ಪದ್ಧತಿಯನ್ನು ಅಳವಡಿಸಿದ್ದು ಬಹಳಷ್ಟು ಸಂಸ್ಥೆಯವರು ಸೆಮಿಸ್ಟರ್ ಪರೀಕ್ಷೆಗೆ ತೆಗೆದುಕೊಳ್ಳಬೇಕಾದ ಶುಲ್ಕದ ಬಗ್ಗೆ ವಿಷದೀಕರಣವನ್ನು ಕೋರಿರುತ್ತಾರೆ. ಈ ನಿಟ್ಟಿನಲ್ಲಿ ಈಗಾಗಲೇ ಆದೇಶ ಸಂಖ್ಯೆ:ಇಡಿ 245 ಟಿಪಿಇ 98 ದಿನಾಂಕ:11.08.2002ರ ಆದೇಶದಲ್ಲಿ ಪ್ರಥಮ, ದ್ವಿತೀಯ ಹಾಗೂ ತೃತೀಯ ವರ್ಷದ ಡಿಪ್ಲೋಮೊ ವಾರ್ಷಿಕ ಪದ್ಧತಿಯ ಪರೀಕ್ಷೆಗಳಿಗೆ ರೂ.300-00ಗಳನ್ನು ಮತ್ತು ಸೆಮಿಸ್ಟರ್ ಪದ್ಧತಿಯ ಪರೀಕ್ಷೆಗಳಿಗೆ ಪ್ರತಿ ಸೆಮಿಸ್ಟರ್‌ಗೆ ರೂ.150-00ನ್ನು ನಿಗದಿಪಡಿಸಲಾಗಿದೆ.

3. ಸೆಮಿಸ್ಟರ್ ಪದ್ಧತಿ ಅಳವಡಿಸಿದ ಸರ್ಕಾರಿ ಸಂಸ್ಥೆಗಳ ಪ್ರಾಂಶುಪಾಲರು, ಸೆಮಿಸ್ಟರ್ ಪದ್ಧತಿಯ ವಿದ್ಯಾರ್ಥಿಗಳಿಗೆ ಯಾವ ದರದಲ್ಲಿ ಶುಲ್ಕವನ್ನು ತೆಗೆದುಕೊಳ್ಳಬೇಕೆಂದು ಲಿಖಿತವಾಗಿ/ ದೂರವಾಣಿ ಮೂಲಕ ವಿಷದೀಕರಣ ಕೋರಿದ್ದಾರೆ. ಈ ಸಂಬಂಧದಲ್ಲಿ ತಾಂತ್ರಿಕ ಶಿಕ್ಷಣ ನಿರ್ದೇಶನಾಲಯದಿಂದ ಸೆಮಿಸ್ಟರ್ ಪದ್ಧತಿಯ ಫೀಯನ್ನು 2003-04ರ ಸಾಲಿನ ಸೆಮಿಸ್ಟರ್ ಪದ್ಧತಿಗೆ ದಿನಾಂಕ:11.08.2002ರ ಸರ್ಕಾರದ ಆದೇಶದ ಪ್ರಕಾರ ಪರೀಕ್ಷಾ ಫೀ ಪಡೆಯಲು ಸೂಚನೆಗಳನ್ನು ಈಗಾಗಲೇ ಸುತ್ತೋಲೆ ಮೂಲಕ ಕಳುಹಿಸಲಾಗಿದೆ. ಪ್ರಯುಕ್ತ ಈಗ ಚಾಲ್ತಿಯಲ್ಲಿರುವ ದಿನಾಂಕ:11.08.2002ರ ಆದೇಶದಲ್ಲಿ ಸೂಚಿಸಿರುವಂತೆ ಈ ಕೆಳಕಂಡಂತೆ ಸಂಸ್ಥೆಗಳವರು ವಿದ್ಯಾರ್ಥಿಗಳಿಂದ ಶುಲ್ಕ ವಸೂಲಿ ಮಾಡಲು ಘಟನೋತ್ತರ ಅನುಮತಿ ಕೋರಿರುತ್ತಾರೆ.

**ವಾರ್ಷಿಕ ಪದ್ಧತಿ ಪರೀಕ್ಷೆಗಳು:**

| | | |
|---|---|---|
| 1. | ಪ್ರಥಮ ಡಿಪ್ಲೋಮಾ ಪರೀಕ್ಷೆ | - ರೂ. 300-00 |
| 2. | ದ್ವಿತೀಯ ಡಿಪ್ಲೋಮಾ ಪರೀಕ್ಷೆ | - ರೂ. 300-00 |
| 3. | ತೃತೀಯ ಡಿಪ್ಲೋಮಾ ಪರೀಕ್ಷೆ | - ರೂ. 300-00 |

**ಸೆಮಿಸ್ಟರ್ ಪದ್ಧತಿ ಪರೀಕ್ಷೆಗಳು:**

| | | |
|---|---|---|
| 1. | ಒಂದನೇ ಸೆಮಿಸ್ಟರ್ | - ರೂ. 150-00 |
| 2. | ಎರಡನೇ ಸೆಮಿಸ್ಟರ್ | - ರೂ. 150-00 |
| 3. | ಮೂರನೇ ಸೆಮಿಸ್ಟರ್ | - ರೂ. 150-00 |
| 4. | ನಾಲ್ಕನೇ ಸೆಮಿಸ್ಟರ್ | - ರೂ. 150-00 |
| 5. | ಐದನೇ ಸೆಮಿಸ್ಟರ್ | - ರೂ. 150-00 |
| 6. | ಆರನೇ ಸೆಮಿಸ್ಟರ್ | - ರೂ. 150-00 |
| 7. | ಒಂದು ವಿಷಯಕ್ಕೆ | - ರೂ. 100-00<br>(60.75 ಪರೀಕ್ಷೆಗಳಿಗೆ) |
| 8. | ಎರಡು ವಿಷಯಕ್ಕೆ | - ರೂ. 100-00 |
| 9. | ಮೂರು ವಿಷಯಕ್ಕೆ | - ರೂ. 150-00 |

ಇದಲ್ಲದೆ, ಅಂಕಪಟ್ಟಿ ಶುಲ್ಕವೆಂದು ಪ್ರತಿ ಪರೀಕ್ಷೆಗೆ ರೂ.25-00 ನಿಗದಿಪಡಿಸಿರುವುದರಿಂದ ಪ್ರಸ್ತುತ ಪ್ರತಿ ಸೆಮಿಸ್ಟರ್‌ಗೂ ರೂ. 25-00 ರಂತೆ ಅಂಕಪಟ್ಟಿ ಶುಲ್ಕವೆಂದು ನಿಗದಿಪಡಿಸಿರುವುದು ಸೂಕ್ತವೆಂದು ತಿಳಿಸಿ ಈ ಬಗ್ಗೆ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿದ್ದಾರೆ. ಪ್ರತಿ ಸೆಮಿಸ್ಟರ್ ಪರೀಕ್ಷೆಗೆ ರೂ. 175/- (ಅಂಕಪಟ್ಟಿ ಶುಲ್ಕ ಸೇರಿ)ಗಳನ್ನು ವಸೂಲಿ ಮಾಡುವಂತೆ ಸರ್ಕಾರದ ಘಟನೋತ್ತರ ಅನುಮೋದನೆ ನಿರೀಕ್ಷಿಸಿ ಸುತ್ತೋಲೆ ಹೊರಡಿಸಲಾಗಿದೆಯೆಂದು ತಿಳಿಸಿರುತ್ತಾರೆ.

4. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 257 ಟಿಪಿಇ 2003, ಬೆಂಗಳೂರು, ದಿನಾಂಕ:31ನೇ ಮಾರ್ಚ್, 2004**

5. ಮೇಲೆ ವಿವರಿಸಿರುವ ಸಂದರ್ಭದ ಹಿನ್ನೆಲೆಯಲ್ಲಿ ಸರ್ಕಾರಿ, ಅನುದಾನಿತ ಹಾಗೂ ಅನುದಾನರಹಿತ ಪಾಲಿಟೆಕ್ನಿಕ್‌ಗಳಲ್ಲಿ 2003-04ನೇ ಸಾಲಿನಿಂದ ಜಾರಿಗೆ ಬರುವಂತೆ ಸೆಮಿಸ್ಟರ್ ಪದ್ಧತಿಯ ಪರೀಕ್ಷಾ ಶುಲ್ಕ ಪ್ರಥಮ, ದ್ವಿತೀಯ ಹಾಗೂ ತೃತೀಯ ವರ್ಷದ ಡಿಪ್ಲೋಮಾ ವಾರ್ಷಿಕ ಪರೀಕ್ಷೆಗಳಿಗೆ ರೂ.325-00 (ಮೂರು ನೂರ ಇಪ್ಪತ್ತೈದು ಮಾತ್ರ, ರೂ.25-00 ಅಂಕಪಟ್ಟಿ ಶುಲ್ಕ ಒಳಗೊಂಡಂತೆ) ಹಾಗೂ ಪ್ರತಿ ಸೆಮಿಸ್ಟರ್ ಪರೀಕ್ಷೆಗಳಿಗೆ ರೂ.175-00 (ರೂ.25/- ಅಂಕಪಟ್ಟಿ ಶುಲ್ಕ ಸೇರಿ ಒಂದು ನೂರ ಎಪ್ಪತ್ತೈದು ಮಾತ್ರ), ಗಳಂತೆ ವಿದ್ಯಾರ್ಥಿಗಳಿಂದ ಶುಲ್ಕ ವಸೂಲಿ ಮಾಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ, ಬೆಂಗಳೂರು ಇವರು ಸುತ್ತೋಲೆ ದಿನಾಂಕ:11.07.2003ರ ಮೂಲಕ ಕೈಗೊಂಡಿರುವ ಕ್ರಮಕ್ಕೆ ಸರ್ಕಾರದ ಘಟನೋತ್ತರ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ವೇಣುಗೋಪಾಲ್**

ಪಿ.ಆರ್.425 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ನಾಗರೀಕ ಸೇವಾ (ವಾರ್ಷಿಕ ಕಾರ್ಯನಿರ್ವಹಣಾ ವರದಿ) ನಿಯಮಗಳು 2000-ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿರುವ ಸರ್ಕಾರದ ಅಧೀನ:ಉಪ:ಜಂಟಿ:ಅಪರ ಕಾರ್ಯದರ್ಶಿಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿ ಬರೆಯುವ: ಪುನರವಲೋಕನ:ಅಂಗೀಕಾರ ಪ್ರಾಧಿಕಾರವನ್ನು ಗುರುತಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್ 417 ಎಸ್‌ಕೆಎಂ 85, ದಿನಾಂಕ:04.03.1987.
2. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 6 ಎಸಿಆರ್ 97, ದಿನಾಂಕ:29.02.2000.
3. ಸುತ್ತೋಲೆ ಸಂಖ್ಯೆ: ಸಿಆಸುಇ 1 ಸೆರವ 98, ದಿನಾಂಕ:18.01.2001.
4. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 5 ಎಸಿಆರ್ 2001, ದಿನಾಂಕ:15.07.2002.
5. (ಕಾನೂನು ಕೋಶ) ಗೃಹ ಮತ್ತು ಸಾರಿಗೆ ಇಲಾಖೆಯ ಕಡತ ಸಂಖ್ಯೆ:ಎಚ್‌ಎಲ್‌ಎಚ್‌ಟಿ:2577:ಎಲ್‌ಸಿ 2000.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ರಹಸ್ಯ ವರದಿಗಳು) ನಿಯಮ 1995- ಕೆ.ಎ.ಎಸ್ ಹಾಗೂ ಇತರೆ ವೃಂದದ ಅಧಿಕಾರಿಗಳ ರಹಸ್ಯ ವರದಿ ಬರೆಯುವ: ಪುನರವಲೋಕನ: ಒಪ್ಪಿಕೊಳ್ಳುವ ಪ್ರಾಧಿಕಾರಗಳನ್ನು ಗುರುತಿಸಿ ಆದೇಶವನ್ನು ಹೊರಡಿಸಲಾಗಿದೆ.

ಕ್ರಮ ಸಂಖ್ಯೆ: (2) (4)ರ ಅಧಿಸೂಚನೆ ಹಾಗೂ ಕ್ರಮ ಸಂಖ್ಯೆ (3)ರ ಸುತ್ತೋಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವಾರ್ಷಿಕ ಕಾರ್ಯನಿರ್ವಹಣಾ ವರದಿ) ನಿಯಮಾವಳಿ 2000ನ್ನು ಹಾಗೂ ಈ ಕುರಿತಾಗಿ ತಿದ್ದುಪಡಿ: ಸುತ್ತೋಲೆಯನ್ನು ಹೊರಡಿಸಲಾಗಿದೆ. ಆದುದರಿಂದ ಸಚಿವಾಲಯದ ಅಧೀನ:ಉಪ:ಸಹ:ಅಪರ ಕಾರ್ಯದರ್ಶಿಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳ ಬಗ್ಗೆ ವಿವಿಧ ಪ್ರಾಧಿಕಾರಗಳನ್ನು ನಿಗದಿಪಡಿಸುವುದು ಅವಶ್ಯವಾಗಿದೆ. ಈ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 153 ಸಅಸೇ 2003, ಬೆಂಗಳೂರು, ದಿನಾಂಕ:24ನೇ ಮಾರ್ಚ್, 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವಾರ್ಷಿಕ ಕಾರ್ಯನಿರ್ವಹಣಾ ವರದಿ) ನಿಯಮಾವಳಿ 2000ರ ನಿಯಮ 11ರನ್ವಯ ಕರ್ನಾಟಕ ಸರ್ಕಾರ ಸಚಿವಾಲಯದ ಅಧೀನ:ಉಪ:ಜಂಟಿ:ಅಪರ ಕಾರ್ಯದರ್ಶಿ ವೃಂದದ ಅಧಿಕಾರಿಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿ ಬಗ್ಗೆ ವರದಿ: ಪುನರವಲೋಕನ: ಅಂಗೀಕಾರ ಪ್ರಾಧಿಕಾರವನ್ನು ಅನುಬಂಧದಲ್ಲಿ ಸೂಚಿಸಿರುವಂತೆ ನಿಗದಿಪಡಿಸಲಾಗಿದೆ.

ಕರ್ನಾಟಕ ನಾಗರೀಕ ಸೇವಾ (ವಾರ್ಷಿಕ ಕಾರ್ಯನಿರ್ವಹಣಾ ವರದಿ) ನಿಯಮಾವಳಿ 2000 ನಿಯಮ 9ರನ್ವಯ ಉಪ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು) ಇವರು ಸರ್ಕಾರದ ಅಧೀನ:ಉಪ:ಜಂಟಿ:ಅಪರ ಕಾರ್ಯದರ್ಶಿಗಳ ಪ್ರತಿಕೂಲ ಷರಾವನ್ನು ಸಂಬಂಧಿಸಿದ ಅಧಿಕಾರಿಗೆ ತಿಳಿಸುವ ಅಧಿಕಾರವನ್ನು ಹೊಂದಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 153 ಸಅಸೇ 2003, ದಿನಾಂಕ:24ನೇ ಮಾರ್ಚ್, 2004ರ ಅನುಬಂಧ**
**ಕರ್ನಾಟಕ ಸರ್ಕಾರ ಸಚಿವಾಲಯದ ಅಧಿಕಾರಿಗಳ ಕಾರ್ಯನಿರ್ವಹಣಾ ವರದಿಯನ್ನು ಬರೆಯುವ ಬಗ್ಗೆ**

| ಕ್ರಮ ಸಂಖ್ಯೆ | ವೃಂದ | ವರದಿ ಪ್ರಾಧಿಕಾರ | ಪರಿಶೀಲನಾ ಪ್ರಾಧಿಕಾರ | ಒಪ್ಪಿಕೊಳ್ಳುವ ಪ್ರಾಧಿಕಾರ |
|---|---|---|---|---|
| 1. | ಅಧೀನ ಕಾರ್ಯದರ್ಶಿ | ಉಪ:ಸಹ:ಅಪರ ಕಾರ್ಯದರ್ಶಿ | ಪ್ರಧಾನ ಕಾರ್ಯದರ್ಶಿ: ಕಾರ್ಯದರ್ಶಿ | ಅಪರ ಮುಖ್ಯ ಕಾರ್ಯದರ್ಶಿ |
| 2. | ಅಧೀನ ಕಾರ್ಯದರ್ಶಿ (ಎಲ್ಲಿ ಅಧೀನ ಕಾರ್ಯದರ್ಶಿಗಳ ಮೇಲೆ ಉಪ: ಸಹ: ಅಪರ ಕಾರ್ಯದರ್ಶಿಗಳು ಇರುವುದಿಲ್ಲವೋ ಆ ಇಲಾಖೆಗಳಿಗೆ ಸಂಬಂಧಿಸಿದಂತೆ) | ಪ್ರಧಾನ ಕಾರ್ಯದರ್ಶಿ: ಕಾರ್ಯದರ್ಶಿ | ಪ್ರಧಾನ ಕಾರ್ಯದರ್ಶಿ: ಕಾರ್ಯದರ್ಶಿ | ಅಪರ ಮುಖ್ಯ ಕಾರ್ಯದರ್ಶಿ |
| 3. | ಉಪ ಕಾರ್ಯದರ್ಶಿ | ಕಾರ್ಯದರ್ಶಿ: ಪ್ರಧಾನ ಕಾರ್ಯದರ್ಶಿ: ಅಪರ ಮುಖ್ಯ ಕಾರ್ಯದರ್ಶಿ: ಹಾಗೂ ಪ್ರಧಾನ ಕಾರ್ಯದರ್ಶಿ. | ಅಪರ ಮುಖ್ಯ ಕಾರ್ಯದರ್ಶಿ: ಮುಖ್ಯ ಕಾರ್ಯದರ್ಶಿ | ಇಲಾಖಾ ಸಚಿವರು |
| 4. | ಸಹ: ಅಪರ ಕಾರ್ಯದರ್ಶಿ | ಕಾರ್ಯದರ್ಶಿ: ಪ್ರಧಾನ ಕಾರ್ಯದರ್ಶಿ: ಅಪರ ಮುಖ್ಯ ಕಾರ್ಯದರ್ಶಿ: ಹಾಗೂ ಪ್ರಧಾನ ಕಾರ್ಯದರ್ಶಿ. | ಅಪರ ಮುಖ್ಯ ಕಾರ್ಯದರ್ಶಿ: ಮುಖ್ಯ ಕಾರ್ಯದರ್ಶಿ | ಇಲಾಖಾ ಸಚಿವರು |

**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್.426 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಆಕುಕ 277 ಎಂಎಸ್‌ಎಸ್ 2004, ಬೆಂಗಳೂರು, ದಿನಾಂಕ:24ನೇ ಮಾರ್ಚ್, 2004**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಅಪರ ನಿರ್ದೇಶಕರ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2004 ರಲ್ಲಿದ್ದಂತೆ ತಯಾರಿಸಲು ಸರ್ಕಾರ ತೀರ್ಮಾನಿಸಿ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ ನಿಯಮಾವಳಿ) 1957ರ ನಿಯಮ 10ನ್ನು ಅನುಸರಿಸಿ ಸಂಬಂಧಿಸಿದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಈ ಮೂಲಕ ಪ್ರಕಟಿಸಿದೆ.

ಅನುಬಂಧದ ತಾತ್ಕಾಲಿಕ ಜೇಷ್ಠತಾಪಟ್ಟಿಯಲ್ಲಿರುವ ಸ್ಥಾನವನ್ನು ಒಪ್ಪಿಕೊಳ್ಳುವುದರಿಂದ ಬಾಧಿತರಾದ ಅಥವಾ ಒಪ್ಪಿಕೊಳ್ಳದ ಅಧಿಕಾರಿಗಳು ಈ ಸ್ಥಾನದಿಂದ ಬಾಧಿತರಾಗಿರುವುದಕ್ಕೆ ಅಥವಾ ಒಪ್ಪಿಕೊಳ್ಳದಿರುವುದಕ್ಕೆ ನಿರ್ದಿಷ್ಟ ಕಾರಣಗಳು ಮತ್ತು ಆಧಾರಗಳನ್ನು ಒಳಗೊಂಡ ಆಕ್ಷೇಪಣೆಗಳನ್ನು ದ್ವಿಪ್ರತಿಗಳಲ್ಲಿ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ತಲುಪುವಂತೆ ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಇವರಿಗೆ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಮೂಲಕ ಸಲ್ಲಿಸತಕ್ಕದ್ದು. ಒಂದು ಮುಂಗಡದ ಪ್ರತಿಯನ್ನು ಕೆಳಗೆ ಸಹಿ ಮಾಡಿರುವವರಿಗೆ ನೇರವಾಗಿ ಕಳುಹಿಸಿಕೊಡಬೇಕು. ಅಲ್ಲದೆ ಈ ಜೇಷ್ಠತಾಪಟ್ಟಿಯಲ್ಲಿ ಕಾಣಿಸಿರುವ ಹೆಸರು ಜನ್ಮ ದಿನಾಂಕ, ಸೇವಾ ವಿವರ ಮುಂತಾದವುಗಳಲ್ಲಿ ನಿರ್ದಿಷ್ಟ ತಪ್ಪುಗಳು ಕಂಡುಬಂದು ಅವುಗಳ ಬದಲಾವಣೆ ಅವಶ್ಯವಿದ್ದಲ್ಲಿ ನಿರ್ದಿಷ್ಟ ದಾಖಲೆಗಳೊಡನೆ ಅವುಗಳನ್ನು ಕೆಳಗೆ ಸಹಿ ಮಾಡಿರುವವರ ಗಮನಕ್ಕೆ ತರಬಹುದು.

ನಿರ್ದಿಷ್ಟ ಕಾರಣಗಳು, ದಾಖಲೆಗಳು ಆಧಾರಗಳು ಇಲ್ಲದಿರುವ ಆಕ್ಷೇಪಣೆಗಳನ್ನು ಮತ್ತು ಅವಧಿ ಮೀರಿ ತಲುಪಿದ ಆಕ್ಷೇಪಣೆಗಳನ್ನು ಸರ್ಕಾರವು ಪರಿಗಣಿಸುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಅನುಬಂಧ

**ದಿನಾಂಕ:01.01.2004 ರಲ್ಲಿದ್ದಂತೆ ಅಪರ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ**

| ಕ್ರ. ಸಂ. | ಹೆಸರು | ನೇರ ನೇಮಕಾತಿ ಮುಂಬಡ್ತಿ ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಪಡೆದ ದಿನಾಂಕ | ನೇಮಕಾತಿ ಜೇಷ್ಠತೆಗೆ ನೈಜವಾದ ಅರ್ಹತೆ ದಿನಾಂಕ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಡಾ: ಹೆಚ್.ಜಿ. ನಾರಾಯಣ ಮೂರ್ತಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 01.05.46 | 15.03.69 | 19.07.03 | 19.07.03 |
| 2. | ಡಾ: ಎಂ.ವಿ.ಜ್ಯೋತಿ ಪ್ರಕಾಶ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 23.04.46 | 12.03.69 | 19.07.03 | 19.07.03 |
| 3. | ಡಾ: ಸಿ.ಎಸ್. ಪದ್ಮ | ಮುಂಬಡ್ತಿ | ಅನ್ವಯಿಸುವುದಿಲ್ಲ | 25.08.46 | 20.08.70 | 19.07.03 | 19.07.03 |

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್.432 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಅಧಿಸೂಚನೆ

**ಸಂಖ್ಯೆ: ಆಕುಕ 278 ಎಂಎಸ್‌ಎಸ್ 2004, ಬೆಂಗಳೂರು, ದಿನಾಂಕ:24ನೇ ಮಾರ್ಚ್, 2004**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಸಹ ನಿರ್ದೇಶಕರ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2004 ರಲ್ಲಿದ್ದಂತೆ ತಯಾರಿಸಲು ಸರ್ಕಾರ ತೀರ್ಮಾನಿಸಿ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ ನಿಯಮಾವಳಿ) 1957ರ ನಿಯಮ 10ನ್ನು ಅನುಸರಿಸಿ ಸಂಬಂಧಿಸಿದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಈ ಮೂಲಕ ಪ್ರಕಟಿಸಿದೆ.

ಅನುಬಂಧದ ತಾತ್ಕಾಲಿಕ ಜೇಷ್ಠತಾಪಟ್ಟಿಯಲ್ಲಿರುವ ಸ್ಥಾನವನ್ನು ಒಪ್ಪಿಕೊಳ್ಳುವುದರಿಂದ ಬಾಧಿತರಾದ ಅಥವಾ ಒಪ್ಪಿಕೊಳ್ಳದ ಅಧಿಕಾರಿಗಳು ಈ ಸ್ಥಾನದಿಂದ ಬಾಧಿತರಾಗಿರುವುದಕ್ಕೆ ಅಥವಾ ಒಪ್ಪಿಕೊಳ್ಳದಿರುವುದಕ್ಕೆ ನಿರ್ದಿಷ್ಟ ಕಾರಣಗಳು ಮತ್ತು ಆಧಾರಗಳನ್ನು ಒಳಗೊಂಡ ಆಕ್ಷೇಪಣೆಗಳನ್ನು ದ್ವಿಪ್ರತಿಗಳಲ್ಲಿ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ತಲುಪುವಂತೆ ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಇವರಿಗೆ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ

ಸೇವೆಗಳು, ಬೆಂಗಳೂರು ಇವರ ಮೂಲಕ ಸಲ್ಲಿಸತಕ್ಕದ್ದು. ಒಂದು ಮುಂಗಡದ ಪ್ರತಿಯನ್ನು ಕೆಳಗೆ ಸಹಿ ಮಾಡಿರುವವರಿಗೆ ನೇರವಾಗಿ ಕಳುಹಿಸಿಕೊಡಬೇಕು. ಅಲ್ಲದೆ ಈ ಜೇಷ್ಠತಾಪಟ್ಟಿಯಲ್ಲಿ ಕಾಣಿಸಿರುವ ಹೆಸರು ಜನ್ಮ ದಿನಾಂಕ, ಸೇವಾ ವಿವರ ಮುಂತಾದವುಗಳಲ್ಲಿ ನಿರ್ದಿಷ್ಟ ತಪ್ಪುಗಳು ಕಂಡುಬಂದು ಅವುಗಳ ಬದಲಾವಣೆ ಅವಶ್ಯವಿದ್ದಲ್ಲಿ ನಿರ್ದಿಷ್ಟ ದಾಖಲೆಗಳೊಡನೆ ಅವುಗಳನ್ನು ಕೆಳಗೆ ಸಹಿ ಮಾಡಿರುವವರ ಗಮನಕ್ಕೆ ತರಬಹುದು.

ನಿರ್ದಿಷ್ಟ ಕಾರಣಗಳು, ದಾಖಲೆಗಳು ಆಧಾರಗಳು ಇಲ್ಲದಿರುವ ಆಕ್ಷೇಪಣೆಗಳನ್ನು ಮತ್ತು ಅವಧಿ ಮೀರಿ ತಲುಪಿದ ಆಕ್ಷೇಪಣೆಗಳನ್ನು ಸರ್ಕಾರವು ಪರಿಗಣಿಸುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಅನುಬಂಧ

**ದಿನಾಂಕ:01.01.2004 ರಲ್ಲಿದ್ದಂತೆ ಸಹ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ**

| ಕ್ರ. ಸಂ. | ಹೆಸರು | ನೇರ ನೇಮಕಾತಿ ಮುಂಬಡ್ತಿ ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಪಡೆದ ದಿನಾಂಕ | ನೇಮಕಾತಿ ಜೇಷ್ಠತೆಗೆ ನೈಜವಾದ ಅರ್ಹತೆ ದಿನಾಂಕ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಡಾ:ಎಸ್.ಎಸ್. ಮಲ್ಕೇಡಕರ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 23.06.46 | 13.11.70 | 26.09.2002 | 26.09.2002 |
| 2. | ಡಾ:ವಿ. ಕೃಷ್ಣಯ್ಯ ಚೌಧರಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 20.03.46 | 10.12.70 | 26.09.2002 | 26.09.2002 |
| 3. | ಡಾ:ಜಿ. ಕಾಶೀರೆಡ್ಡಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 01.07.46 | 15.10.70 | 26.09.2002 | 26.09.2002 |
| 4. | ಡಾ: ಕೊಟಿಲ್ಡಾ ರೀಟಾ ಲೋಬೋ | ಮುಂಬಡ್ತಿ | ಅನ್ವಯಿಸುವುದಿಲ್ಲ | 14.04.46 | 04.09.71 | 26.09.2002 | 26.09.2002 |
| 5. | ಡಾ: ಎನ್. ಪ್ರಮೀಳ | ಮುಂಬಡ್ತಿ | ಅನ್ವಯಿಸುವುದಿಲ್ಲ | 28.05.46 | 04.05.71 | 26.09.2002 | 26.09.2002 |
| 6. | ಡಾ: ಬಿ. ವಿದ್ಯಾಮಣಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 31.01.47 | 04.03.71 | 19.07.2003 | 19.07.2003 |
| 7. | ಡಾ: ಪಾರ್ವತಿ ವಿ. ನಾಗರಾಳ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 01.08.47 | 04.06.71 | 19.07.2003 | 19.07.2003 |
| 8. | ಡಾ: ಗೌರಮ್ಮ | ಮುಂಬಡ್ತಿ | ಅನ್ವಯಿಸುವುದಿಲ್ಲ | 22.02.46 | 04.07.71 | 19.07.2003 | 19.07.2003 |
| 9. | ಡಾ: ಚಂದ್ರ ಆರ್. ನಾಯಕ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 25.09.46 | 22.09.71 | 19.07.2003 | 19.07.2003 |
| 10. | ಡಾ: ಕರ್ಪೂರ ಮಲ್ಲಪ್ಪ | ಮುಂಬಡ್ತಿ | ಅನ್ವಯಿಸುವುದಿಲ್ಲ | 22.11.46 | 24.07.71 | 22.10.2003 | 22.10.2003 |
| 11. | ಡಾ: ಟಿ. ಪಾರ್ಥಸಾರಥಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 18.03.46 | 20.09.71 | 22.10.2003 | 22.10.2003 |

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್.433 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಬೆಂಗಳೂರು ಮತ್ತು ಧಾರವಾಡ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಕೃಷಿ ಕ್ಷೇತ್ರದ ಸಂಶೋಧನೆಯ ಪುನರಾವಲೋಕನ ಸಮಿತಿಗೆ ವರದಿ ಸಲ್ಲಿಸಲು ಹೆಚ್ಚಿನ ಕಾಲಾವಕಾಶ ನೀಡುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ:05.02.2004ರ ಸರ್ಕಾರಿ ಆದೇಶ ಸಂಖ್ಯೆ:ಕೃತೋಇ 24 ಕೃವಿವಿ 2004.
2. ದಿನಾಂಕ:20.03.2004ರ ಶ್ರೀ ಜೆ.ಕೆ. ಅರೋರ, ಅಧ್ಯಕ್ಷರು, ಕೃಷಿ ಕ್ಷೇತ್ರದ ಸಂಶೋಧನೆಯ ಪುನರಾವಲೋಕನ ಸಮಿತಿರವರ ಪತ್ರ.

**ಪ್ರಸ್ತಾವನೆ:**

ಬೆಂಗಳೂರು ಮತ್ತು ಧಾರವಾಡ ಕೃಷಿ ವಿಶ್ವವಿದ್ಯಾನಿಲಯಗಳು ಕೃಷಿ ಕ್ಷೇತ್ರದಲ್ಲಿ ನಡೆಸಿರುವ ಸಂಶೋಧನೆಗಳ ಬಗ್ಗೆ ಅಧ್ಯಯನ ನಡೆಸಿ, ಸಲಹೆ ಮತ್ತು ಶಿಫಾರಸ್ಸುಗಳನ್ನು ನೀಡಲು ಎಂಟು ಸದಸ್ಯರನ್ನೊಳಗೊಂಡಂತೆ ಶ್ರೀ ಜೆ.ಕೆ. ಅರೋರ, ನಿವೃತ್ತ ಅಭಿವೃದ್ಧಿ ಆಯುಕ್ತರು, ಕರ್ನಾಟಕ ಸರ್ಕಾರ, ಇವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಉಲ್ಲೇಖ(1)ರ ಆದೇಶದಲ್ಲಿ ರಚಿಸಲಾಗಿದ್ದು, ಸದರಿ ಸಮಿತಿಯು ಎರಡು ತಿಂಗಳೊಳಗೆ ವರದಿಯನ್ನು ಸಲ್ಲಿಸತಕ್ಕದ್ದೆಂದು ಆದೇಶಿಸಲಾಗಿತ್ತು.

ಬೆಂಗಳೂರು ಮತ್ತು ಧಾರವಾಡ ಕೃಷಿ ವಿಶ್ವವಿದ್ಯಾನಿಲಯಗಳಲ್ಲಿ ಕೃಷಿ ಕ್ಷೇತ್ರದ ಸಂಶೋಧನೆಯ ಪುನರಾವಲೋಕನ ಸಮಿತಿಯ ಅಧ್ಯಕ್ಷರಾದ ಶ್ರೀ ಜೆ.ಕೆ. ಅರೋರರವರು ಈ ವಿಷಯದ ಬಗ್ಗೆ ವರದಿ ಸಲ್ಲಿಸಲು ಎರಡು ತಿಂಗಳ ಕಾಲಾವಕಾಶ ನಿಗದಿಪಡಿಸಿದ್ದು, ಈ ಅವಧಿಯೊಳಗೆ ವರದಿ ಸಲ್ಲಿಸಲು ಸಾಧ್ಯವಾಗದೆ ಇರುವುದರಿಂದ ದಿನಾಂಕ:31.10.2004ರವರೆಗೆ ವರದಿ ಸಲ್ಲಿಸಲು ಕಾಲಾವಕಾಶ ನೀಡುವಂತೆ ಉಲ್ಲೇಖ (2)ರ ಪತ್ರದಲ್ಲಿ ಸರ್ಕಾರವನ್ನು ಕೋರಿದ್ದಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಬೆಂಗಳೂರು ಮತ್ತು ಧಾರವಾಡ ಕೃಷಿ ವಿಶ್ವವಿದ್ಯಾಲಯಗಳು ಕೃಷಿ ಕ್ಷೇತ್ರದಲ್ಲಿ ನಡೆಸಿರುವ ಸಂಶೋಧನೆಗಳ ಬಗ್ಗೆ ಸಂಪೂರ್ಣವಾಗಿ ಪುನರ್ ಪರಿಶೀಲಿಸಿ ನಡೆಸಲಾದ ಸಂಶೋಧನೆಯ ಉಪಯುಕ್ತತೆ ಮತ್ತು ಬಳಸುವಿಕೆಯ ಬಗ್ಗೆ ವ್ಯಾಖ್ಯಾನಿಸಲು ಎರಡು ತಿಂಗಳುಗಳಿಗಿಂತ ಹೆಚ್ಚಿನ ಕಾಲಾವಕಾಶ ಅವಶ್ಯವಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕೃತೋಇ 63 ಕೃವಿವಿ 2004, ಬೆಂಗಳೂರು, ದಿನಾಂಕ:6ನೇ ಏಪ್ರಿಲ್, 2004**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಈ ಬಗ್ಗೆ ವರದಿ ಸಲ್ಲಿಸಲು ಸದರಿ ಸಮಿತಿಯ ಕಾಲಾವಕಾಶವನ್ನು ಜೂನ್ 30, 2004ರ ವರೆಗೆ ವಿಸ್ತರಿಸಿದೆ ಹಾಗೂ ಈ ಅವಧಿಯಲ್ಲಿಯೇ ಸಮಿತಿಯು ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್.435 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಮೈಸೂರಿನಲ್ಲಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ ಅಪೂರ್ಣಗೊಂಡಿರುವ ಕಟ್ಟಡವನ್ನು ಪೂರ್ಣಗೊಳಿಸಲು ಅನುದಾನ ಬಿಡುಗಡೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಸಂಕಇ 4 ಕೆಎಂಯು 2002, ದಿನಾಂಕ:20.10.2003.
2. ಸರ್ಕಾರಿ ಆದೇಶ ಸಂಖ್ಯೆ:ಸಂಕಇ 41 ಸ್ವೀಮರ 2003, ದಿನಾಂಕ:30.04.2003.
3. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಡಿಎಎಂ. ಎಸಿಟಿ 1 ಕಟ್ಟಡ 2003-04 ದಿನಾಂಕ:23.02.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ವಸ್ತು ಸಂಗ್ರಹಾಲಯದ ಕಟ್ಟಡದ ಕಾಮಗಾರಿಯನ್ನು ಕರ್ನಾಟಕ ರಾಜ್ಯ ನಿರ್ಮಾಣ ನಿಗಮಕ್ಕೆ ವಹಿಸಲಾಗಿದ್ದು, ಈ ಸಂಸ್ಥೆಯು ಮುಚ್ಚುವ ಹಂತದಲ್ಲಿದ್ದುದರಿಂದ ಅವರಿಗೆ ಸಂದಾಯ ಮಾಡಬೇಕಾಗಿದ್ದ ಬಾಕಿ ರೂ. 3.88 ಲಕ್ಷವನ್ನು ಬಿಡುಗಡೆ ಮಾಡಲಾಗಿದೆ.

ಕ್ರಮ ಸಂಖ್ಯೆ-2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿನ ಮುಂದುವರಿದ ಯೋಜನೆಯಡಿಯಲ್ಲಿ ಪ್ರಸ್ತುತ ಬಾಕಿ ಉಳಿದಿರುವ ಕಟ್ಟಡವನ್ನು ಪೂರ್ಣಗೊಳಿಸಲು ರೂ.4.37 ಲಕ್ಷವನ್ನು ನಿಗದಿಪಡಿಸಲಾಗಿದೆ.

ಮೈಸೂರಿನ ವಸ್ತು ಪ್ರದರ್ಶನ ಪ್ರಾಧಿಕಾರದ ಆವರಣದಲ್ಲಿ, ಅಪೂರ್ಣಗೊಂಡಿರುವ ಕಟ್ಟಡವನ್ನು ಪೂರ್ಣಗೊಳಿಸಲು ಕರ್ನಾಟಕ ಭೂಸೇನಾ ನಿಗಮ ನಿಯಮಿತ ಮೈಸೂರು, ಇವರಿಗೆ ರೂ.4.37 ಲಕ್ಷವನ್ನು ಬಿಡುಗಡೆ ಮಾಡಬೇಕೆಂದು ಮೇಲೆ ಓದಲಾದ ಕ್ರಮ ಸಂಖ್ಯೆ-3ರ ಪತ್ರದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ನಿರ್ದೇಶಕರು ಪ್ರಸ್ತಾವನೆಯನ್ನು ಸಲ್ಲಿಸಿ, ಸದರಿ ಅನುದಾನವನ್ನು ಕರ್ನಾಟಕ ಭೂಸೇನಾ ನಿಗಮ ನಿಯಮಿತ ಮೈಸೂರು ಇವರಿಗೆ ಠೇವಣಿ ಇಡಲು ಸೂಕ್ತ ಮಂಜೂರಾತಿ ಆದೇಶ ನೀಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಂಕಇ 37 ಕೆಎಂಯು 2004, ಬೆಂಗಳೂರು, ದಿನಾಂಕ:31ನೇ ಮಾರ್ಚ್, 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮೈಸೂರಿನ ವಸ್ತುಪ್ರದರ್ಶನ ಪ್ರಾಧಿಕಾರದ ಆವರಣದಲ್ಲಿ ಅಪೂರ್ಣಗೊಂಡಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ ಕಟ್ಟಡವನ್ನು ಪೂರ್ಣಗೊಳಿಸಲು ರೂ.4.37 ಲಕ್ಷವನ್ನು ಕರ್ನಾಟಕ ಭೂಸೇನಾ ನಿಗಮ ನಿಯಮಿತ ಮೈಸೂರು ಇವರಿಗೆ ಠೇವಣಿ ಇಡಲು ನಿರ್ದೇಶಕರು ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರಿಗೆ ಮಂಜೂರಾತಿ ನೀಡಿ ಹಣ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 4202-04-800-1-01 (ಬಂಡವಾಳ ವೆಚ್ಚ) 139 ಪ್ರಧಾನ ಕಾಮಗಾರಿಗಳು (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 534 ವೆಚ್ಚ-5:2004 ದಿನಾಂಕ:31.03.2004ರಲ್ಲಿ ನೀಡಿರುವ ಸಹಮತಿ ಮೇರೆಗೆ ಹಾಗೂ ಲೋಕೋಪಯೋಗಿ ಇಲಾಖೆಯ ಆರ್ಥಿಕ ಕೋಶದ ಅಧಿಸೂಚನೆ ಸಂಖ್ಯೆ:ಪಿಡಬ್ಲ್ಯೂಡಿ 214 ಎಫ್‌ಸಿ-III/2004 ದಿನಾಂಕ:30.03.2004ರಲ್ಲಿ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999ರಲ್ಲಿ ನೀಡಿರುವ ವಿನಾಯಿತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್.436 ಸರ್ಕಾರದ ಉಪ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ ಆದೇಶ**

**ಸಂಖ್ಯೆ:ಆಕುಕ 101 ಹೆಚ್‌ಎಸ್‌ಹೆಚ್ 2004, ಬೆಂಗಳೂರು, ದಿನಾಂಕ:27ನೇ ಮಾರ್ಚ್, 2004**

ಸರ್ಕಾರದ ಆದೇಶ ಸಂಖ್ಯೆ:ಆಕುಕ 939 ಹೆಚ್‌ಎಸ್‌ಹೆಚ್ 2003, ದಿನಾಂಕ:20.12.2003ರ ಅನುಬಂಧದಲ್ಲಿನ ಕ್ರಮ ಸಂಖ್ಯೆ 7ರಲ್ಲಿ "ಡಾ: ರಾಜು ಜಿ; ಡಿಎಲ್‌ಒ: ಮೈಸೂರು" ಎಂಬುದಕ್ಕೆ ಬದಲಾಗಿ "ಡಾ: ರಾಜು ಜಿ; ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಆಲೇನಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಶೀನಾಥ ಪಟವಾಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್.437

## LAW SECRETARIAT

**Sub:** Cancellation of Appointment of Special Public Prosecutor to conduct S.C. No.440/2000, pending on the file of the Additional Sessions Judge (CCH-26) Bangalore City.

**Read:** 1. Notification No. LAW 2944 LCM 2002, Dated:20.08.2002.
2. Letter dated:21.03.2004, from Sri S.Dore Raju, Advocate, Bangalore.

**Preamble:**

In Notification read at above (1) dated:20.08.2002, Sri S. Dore Raju, Advocate, Bangalore was appointed as Special Counsel in order to conduct S.C. No.440/2000, pending on the file of the Additional Sessions Judge (CCH-26) Bangalore City. In the letter cited at (2) read above, Sri S. Dore Raju, Advocate, Bangalore has requested Government to withdraw the said Notification in view of his inability to conduct the trial in the said case.

**Order No. LAW 2944 LCM 2002, Bangalore, Dated:8th April, 2004**

The Notification read at (1) above appointing Sri S. Dore Raju, Advocate, Bangalore to conduct S.C. No.440/2000, pending on the file of Additional Sessions Judge (CCH-26), Bangalore City, is hereby withdrawn.

By Order and in the name of the Governor of Karnataka,
**VINEETHA P. SHETTY**
Asst. Solicitor and Ex.Officio,
Under Secretary to Government, Law Department (LIT.I).

PR-438

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿನ ಉಪ ಕಾರ್ಯದರ್ಶಿ (ಕಾರ್ಯಕಾರಿ) ಹುದ್ದೆಯ ಮುಂದುವರಿಕೆ ಬಗ್ಗೆ- ದಿನಾಂಕ:01.04.2004 ರಿಂದ ದಿನಾಂಕ:31.03.2005ರವರೆಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 25 ಸಸಿವಿ 95 ದಿನಾಂಕ:18.12.1995.
2. ತಿದ್ದೋಲೆ ಸಂಖ್ಯೆ:ಸಿಆಸುಇ 25 ಸಸಿವಿ 95, ದಿನಾಂಕ:20.12.1995.
3. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 39 ಸಸಿವಿ 97 ದಿನಾಂಕ:05.02.1998.
4. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 39 ಸಸಿವಿ 97 ದಿನಾಂಕ:11.03.1998.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸಸಿವಿ 2001 ದಿನಾಂಕ:18.10.2001.
6. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 29 ಸಸಿವಿ 2002 ದಿನಾಂಕ:03.06.2002.
7. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 49 ಸಸಿವಿ 2003 ದಿನಾಂಕ:03.06.2003.
8. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)ಯ ಟಿಪ್ಪಣಿ ಸಂಖ್ಯೆ:ಸಿಆಸುಇ 125 ಉಕಾ (ಕಾ) 2004 ದಿನಾಂಕ:29.03.2004.

**ಪ್ರಸ್ತಾವನೆ:**

ದಿನಾಂಕ:20.12.1995ರ ತಿದ್ದೋಲೆಯೊಡನೆ ಓದಲಾದ ದಿನಾಂಕ:18.12.1995ರ ಮೇಲೆ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ 'ಕಾರ್ಯಕಾರಿ' ವಿಭಾಗದಲ್ಲಿ ರೂ.3825-5825ರ ವೇತನ ಶ್ರೇಣಿಯಲ್ಲಿ ಉಪ ಕಾರ್ಯದರ್ಶಿ ಹುದ್ದೆಯೊಂದನ್ನು ದಿನಾಂಕ:31.03.1997ರವರೆಗೆ ಕೆಳಕಂಡ ಆಪ್ತ ಸಹಾಯಕ ಸಿಬ್ಬಂದಿ ವರ್ಗದೊಡನೆ ಸೃಜಿಸಲಾಗಿದೆ.

| | | |
|---|---|---|
| 1. | ಶೀಘ್ರಲಿಪಿಗಾರರು | 1 |
| 2. | ಕಿರಿಯ ಸಹಾಯಕ | 1 |
| 3. | ದಲಾಯತ್ | 1 |

ಈ ಹುದ್ದೆಗಳನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದ್ದು, ಅಂತಿಮವಾಗಿ ಕ್ರಮಸಂಖ್ಯೆ (7)ರಲ್ಲಿ ಓದಲಾದ ದಿನಾಂಕ:03.06.2003ರ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾದ ಅವಧಿಯು ದಿನಾಂಕ:31.03.2004ಕ್ಕೆ ಮುಕ್ತಾಯಗೊಂಡಿರುತ್ತದೆ.

ಸದರಿ ಹುದ್ದೆಗಳನ್ನು ದಿನಾಂಕ:01.04.2004ರಿಂದ ಮುಂದುವರೆಸುವಂತೆ ಕ್ರಮ ಸಂಖ್ಯೆ (8)ರಲ್ಲಿ ಓದಲಾಗಿರುವ ಟಿಪ್ಪಣಿಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)ಯು ಪ್ರಸ್ತಾವನೆಯನ್ನು ಕಳುಹಿಸಿದ್ದು, ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 22 ಸಸಿವಿ 2004, ಬೆಂಗಳೂರು, ದಿನಾಂಕ:8ನೇ ಏಪ್ರಿಲ್, 2004**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ 'ಕಾರ್ಯಕಾರಿ' ವಿಭಾಗದಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಉಪ ಕಾರ್ಯದರ್ಶಿ ಹುದ್ದೆ ಹಾಗೂ ಪ್ರಸ್ತಾವನೆಯಲ್ಲಿ ತಿಳಿಸಿದ ಆಪ್ತ ಸಿಬ್ಬಂದಿ ವರ್ಗದ ಹುದ್ದೆಗಳನ್ನು ದಿನಾಂಕ:01.04.2004ರಿಂದ 31.03.2005ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ದಿನಾಂಕ:10.07.1996ರ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96ರಲ್ಲಿನ ಅಧಿಕಾರ ಪ್ರತ್ಯಾಯೋಜನೆಯಂತೆ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್.439 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಸೃಜಿಸಲಾಗಿರುವ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್ 265 ಎಸ್‌ಎಎಸ್ 2001 ದಿನಾಂಕ:15.06.2001.

2. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 60 ಸಸಿವಿ 2003, ದಿನಾಂಕ:25.06.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:15.06.2001ರ ಸರ್ಕಾರಿ ಆದೇಶದಲ್ಲಿ ಮುಖ್ಯ ಮಂತ್ರಿಗಳ ಸಚಿವಾಲಯದಲ್ಲಿ ಐ.ಎ.ಎಸ್. ನ ಎಬೌ ಸ್ಕೇಲ್ ರೂ.22400-525-24500ರಲ್ಲಿ ಒಂದು ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ:31.03.2001ರಿಂದ ತಾತ್ಕಾಲಿಕವಾಗಿ 2 ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲು ಮಂಜೂರಾತಿ ನೀಡಲಾಗಿದೆ.

ಪ್ರಸ್ತುತ ಸದರಿ ಹುದ್ದೆಯ ಕಾಲಾವಧಿಯು ದಿನಾಂಕ:31.03.2004ಕ್ಕೆ ಮುಕ್ತಾಯಗೊಂಡಿರುತ್ತದೆ. ಆದುದರಿಂದ ಈ ಹುದ್ದೆಯನ್ನು ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 21 ಸಸಿವಿ 2004, ಬೆಂಗಳೂರು, ದಿನಾಂಕ:5ನೇ ಏಪ್ರಿಲ್, 2004**

ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಐ.ಎ.ಎಸ್. ನ ಎಬೌ ಸೂಪರ್ ಟೈಂ ಸ್ಕೇಲ್ ರೂ.22400-525-24500ರ ಒಂದು ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ:01.04.2004 ರಿಂದ 31.03.2005ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಸದರಿ ಸರ್ಕಾರದ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.07.1996ರಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್.440 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## FOREST, ECOLOGY AND ENVIRONMENT SECRETARIAT

## CORRIGENDUM

**No. FEE 32 FFM 2004, Bangalore, Dated:1st April, 2004**

**Sub:** Renewal of mining lease M/s Mahaboob Transport Company, Bellary for Iron Ore over an area of 16.19ha. in Vittalapura Village, Bellary District (M.L.No.109).

**Ref:** 1. Government Order No.FEE 3 FFM 92, Dated:07.12.01.

2. Letter No.F©A/16.1/KAR/22/MIN/2004, Dated:06.01.2004 of Government of India, Ministry of Environment and Forests, Regional Office, Bangalore.

In the order portion of the G.O.No. FEE 3 FFM 92, Dated:07.12.2001 granting renewal of mining lease No.109 for a period of 10 years in favour of M/s Mahoob Transport Company, Bellary, after the figures "20.09.2000", the following words and figures shall be substituted in compliance with the Government of India's letter dated:06.01.2004 read at (2) above:

"and further extended under Forest (Conservation) Act, 1980 from 29.02.2010 to 20.09.2012".

By Order and in the name of the Governor of Karnataka,

**S.R. VATSALA**

PR-442 Under Secretary to Government,

Forest, Ecology and Environment Department.

